# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ : 791

ಸದಸ್ಯರ ಹೆಸರು : ಶ್ರೀ. ಎಸ್.ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ಸಚಿವರು : ಪೌರಾಡಳಿತ,ತೋಟಗಾರಿಕೆ ಮತ್ತು ರೇಷ್ಮೆ ಸಚಿವರು

ಉತ್ತರಿಸಬೇಕಾದ ದಿನಾಂಕ : 15.12.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ತೋಟಗಾರಿಕೆ ಅಭಿವೃದ್ಧಿಗಾಗಿ ಅನುಷ್ಠಾನಗೊಳ್ಳುತ್ತಿರುವ ಕೇಂದ್ರ/ರಾಜ್ಯ ಸರ್ಕಾರದ ಯೋಜನೆಗಳು ಎಷ್ಟು; ಸದರಿ ಯೋಜನೆಗಳಲ್ಲಿ ರೈತರಿಗೆ ನೀಡುವ ಎಸ್.ಸಿ.ಪಿ/ಟಿ.ಎಸ್.ಪಿ ಶೇಕಡ ಸಹಾಯಧನ ಎಷ್ಟು: | ರಾಜ್ಯದಲ್ಲಿ ತೋಟಗಾರಿಕೆ ಅಭಿವೃದ್ಧಿಗಾಗಿ ಅನುಷ್ಠಾನಗೊಳ್ಳುತ್ತಿರುವ ಕೇಂದ್ರ/ರಾಜ್ಯ ಸರ್ಕಾರದ ಯೋಜನೆಗಳ ಪಟ್ಟಿಯನ್ನು ಅನುಬಂಧ-1ರಲ್ಲಿ ಹಾಗೂ ಸದರಿ ಯೋಜನೆಗಳಲ್ಲಿ ರೈತರಿಗೆ ನೀಡುವ ಎಸ್.ಸಿ.ಪಿ/ಟಿ.ಎಸ್.ಪಿ ಶೇಕಡ ಸಹಾಯಧನದ ವಿವರಗಳನ್ನು ಅನುಬಂಧ-2ರಲ್ಲಿ ಒದಗಿಸಿದೆ. |
| ಆ) | 2020-21ನೇ ಸಾಲಿನಲ್ಲಿ ರೈತರಿಗೆ ಕೇಂದ್ರ ಸರ್ಕಾರದ ಯೋಜನೆಗಳಿಗೆ ರಾಜ್ಯ ಸರ್ಕಾರದಿಂದ ಎಸ್.ಸಿ.ಪಿ/ಟಿ.ಎಸ್.ಪಿ ಹೊಂದಾಣಿಕೆ ಮೊತ್ತವನ್ನು ನೀಡಲಾಗುತ್ತಿದೆಯೇ: ನೀಡಲಾಗುತ್ತಿದ್ದಲ್ಲಿ, ಎಷ್ಟು ಮೊತ್ತ ನೀಡಲಾಗಿದೆ: | 2020-21ನೇ ಸಾಲಿನಲ್ಲಿ ಕೇಂದ್ರ ಸರ್ಕಾರದ ಯೋಜನೆಗಳಿಗೆ ಎಸ್.ಸಿ.ಪಿ/ಟಿ.ಎಸ್.ಪಿ ಯಡಿ ರೈತರಿಗೆ ಹೊಂದಾಣಿಕೆ ಮೊತ್ತವನ್ನು ನೀಡಲು ರಾಜ್ಯ ಸರ್ಕಾರದಿಂದ ಅನುದಾನ ನಿಗದಿಯಾಗಿರುವುದಿಲ್ಲ. ಪ್ರಸ್ತಾವನೆಯು ಸರ್ಕಾರದ ಪರಿಶೀಲನಾ ಹಂತದಲ್ಲಿರುತ್ತದೆ. |
| ಇ) | 2019-20ನೇ ಸಾಲಿನಲ್ಲಿ ತೋಟಗಾರಿಕೆ ಇಲಾಖೆಯಲ್ಲಿ ಅನುಷ್ಠಾನಗೊಳಿಸಿರುವ ಎಲ್ಲಾ ಯೊಜನೆಗಳನ್ನು ಪ್ರಸಕ್ತ ಸಾಲಿನಲ್ಲಿಯೂ ಅನುಷ್ಠಾನಗೊಳಿಸಲಾಗುತ್ತಿದೆಯೇ: | -ಇಲ್ಲ- |
| ಈ) | ಪ್ರಸಕ್ತ ಸಾಲಿನಲ್ಲಿ 30 ಹೆಚ್.ಪಿ ಟ್ರಾಕ್ಟರ್ ಗಳಿಗೆ ಸಹಾಯಧನ ನೀಡಲಾಗುತ್ತಿದೆಯೇ: | ಕೇಂದ್ರ ಸರ್ಕಾರದ ಕೃಷಿ ಯಾಂತ್ರೀಕರಣ ಉಪ-ಅಭಿಯಾನ (SMAM) ಕಾರ್ಯಕ್ರಮದಡಿ 30 ಹೆಚ್.ಪಿ.ಟ್ರಾಕ್ಟರ್ ಗಳನ್ನೊಳಗೊಂಡಂತೆ ಇತರೆ |

| | | |
|---|---|---|
| | ನೀಡಲಾಗುತ್ತಿದ್ದಲ್ಲಿ ಸಹಾಯಧನದ ಮೊತ್ತ ಎಷ್ಟು: ಇಲ್ಲವಾದಲ್ಲಿ ಯಾವ ಕಾರಣಕ್ಕೆ ನೀಡಲಾಗುತ್ತಿಲ್ಲ? | ಯಂತ್ರೋಪಕರಣಗಳಿಗೆ ಸಹಾಯಧನ ನೀಡಲು ಅವಕಾಶವಿರುತ್ತದೆ. ಆದರೆ, ಪ್ರಸಕ್ತ ಸಾಲಿಗೆ ಸದರಿ ಕಾರ್ಯಕ್ರಮದಡಿ ಸಲ್ಲಿಸಿದ ಪ್ರಸ್ತಾವನೆ ಕೇಂದ್ರ ಸರ್ಕಾರದಿಂದ ಇನ್ನೂ ಅನುಮೋದನೆಯಾಗದ ಹಾಗೂ ಅನುದಾನ ಬಿಡುಗಡೆಯಾಗದ ಕಾರಣ 30 ಹೆಚ್.ಪಿ. ಟ್ರಾಕ್ಟರ್ ಗಳಿಗೆ ಸಹಾಯಧನ ನೀಡಲಾಗಿರುವುದಿಲ್ಲ.<br>ಮುಂದುವರೆದು ಕೇಂದ್ರ ಸರ್ಕಾರದ ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ 30 ಹೆಚ್.ಪಿ. ಟ್ರ್ಯಾಕ್ಟರ್ ಗಳಿಗೆ ಸಹಾಯಧನ ನೀಡಲಾಗುತ್ತಿಲ್ಲ. ಸದರಿ ಯೋಜನೆಯ ಅನುಷ್ಠಾನ ಮಾರ್ಗಸೂಚಿಯಲ್ಲಿ 20 ಹೆಚ್.ಪಿ. ಟ್ರ್ಯಾಕ್ಟರ್ ಗಳಿಗೆ ಮಾತ್ರ ಸಹಾಯಧನಕ್ಕೆ ಪರಿಗಣಿಸಲು ಅವಕಾಶವಿರುತ್ತದೆ. |

ನಂ: HORTI/ 520/HGM/2020-admn-Horti-Sec

(ನಾರಾಯಣಗೌಡ)

**ಪೌರಾಡಳಿತ, ತೋಟಗಾರಿಕೆ**

**ಮತ್ತು ರೇಷ್ಮೆ ಸಚಿವರು**

## 2020-21ನೇ ಸಾಲಿನಲ್ಲಿ ತೋಟಗಾರಿಕೆ ಅಭಿವೃದ್ಧಿಗಾಗಿ ಇಲಾಖೆಯಿಂದ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ ವಿವರ

| ಕ್ರ.ಸಂ. | ಯೋಜನೆಗಳು |
|---|---|
| I | **ಕೇಂದ್ರ ನೆರವಿನ ಯೋಜನೆಗಳು** |
| 1 | ರಾಷ್ಟ್ರೀಯ ಎಣ್ಣೆಕಾಳು ಮತ್ತು ಎಣ್ಣೆ ತಾಳೆ ಅಭಿಯಾನ ಯೋಜನೆ |
| 2 | ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ (ಹನಿ ನೀರಾವರಿ) |
| 3 | ಉತ್ಪಾದನಾ ಸುಧಾರಣಾ ಕಾರ್ಯ ಯೋಜನೆಗೆ ತೆಂಗಿನಲ್ಲಿ ಸಂಯೋಜಿತ ಬೇಸಾಯ |
| 4 | ರಾಷ್ಟ್ರೀಯ ತೋಟಗಾರಿಕೆ ಮಿಷನ್ |
| 5 | ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ |
| II | **ರಾಜ್ಯವಲಯ ಯೋಜನೆಗಳು** |
| 1 | ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪ ಯೋಜನೆ ಕಾಯ್ದೆ 2013 ರಡಿ ಬಳಕೆಯಾಗದೆ ಇರುವ ಮೊತ್ತ, |
| 2 | ತೋಟಗಾರಿಕೆ ನಿಗಮ ಮತ್ತು ಮಂಡಳಿಗಳಿಗೆ ಸಹಾಯಧನ |
| 3 | ಸಮಗ್ರ ತೋಟಗಾರಿಕಾ ಅಭಿವೃದ್ಧಿ ಯೋಜನೆ |
| 4 | ಕೃಷಿ ಕ್ಷೇತ್ರ ಮತ್ತು ಸಸ್ಯವಾಟಿಕೆಗಳ ಅಭಿವೃದ್ಧಿ ಮತ್ತು ನಿರ್ವಹಣೆ |
| 5 | ಇಲಾಖಾ ಪ್ರಯೋಗ ಶಾಲೆಗಳ ಅಭಿವೃದ್ಧಿ ಯೋಜನೆ |
| 6 | ತೋಟಗಾರಿಕೆ ಬೆಳೆಗಳ ಕೀಟ ಮತ್ತು ರೋಗಗಳ ಸಮಗ್ರ ನಿಯಂತ್ರಣ ಯೋಜನೆ |
| 7 | ತೋಟಗಾರಿಕೆ ಕಟ್ಟಡಗಳು |
| 8 | ತೋಟಗಾರಿಕೆ ಉದ್ಯಾನವನಗಳು ಮತ್ತು ತೋಟಗಳು |
| 9 | ಮಧುವನ ಮತ್ತು ಜೇನು ಸಾಕಾಣೆ ಅಭಿವೃದ್ಧಿ |
| 10 | ತೋಟಗಾರಿಕೆ ಮೂಲ ಸೌಲಭ್ಯ ಅಭಿವೃದ್ಧಿ |
| 11 | ಬಾಗಲಕೋಟೆಯಲ್ಲಿ ತೋಟಗಾರಿಕ ವಿಶ್ವ ವಿದ್ಯಾಲಯದ ಬಂಡವಾಳ |
| III | **ಜಿಲ್ಲಾವಲಯ ಯೋಜನೆಗಳು** |
| 1 | ತೋಟಗಾರಿಕೆ ಬೆಳೆಗಳಿಗೆ ವಿಶೇಷ ಹನಿ ನೀರಾವರಿ |
| 2 | ತೋಟಗಾರಿಕೆ ಕಟ್ಟಡಗಳು |
| 3 | ತೋಟಗಾರಿಕೆ ಕ್ಷೇತ್ರಗಳ ನಿರ್ವಹಣೆ |
| 4 | ತೆಂಗು ಬೀಜ ಸಂಗ್ರಹಣೆ ಮತ್ತು ನರ್ಸರಿ ನಿರ್ವಹಣೆಗಾಗಿ ಯೋಜನೆ |
| 5 | ಪ್ರಚಾರ ಮತ್ತು ಸಾಹಿತ್ಯ |
| 6 | ಶೀಥಲ ಗೃಹಗಳಿಗೆ ಸಹಾಯಧನ ಯೋಜನೆ |
| 7 | ರೈತರಿಗೆ ತರಬೇತಿ |
| 8 | ಜೇನು ಸಾಕಾಣಿಕೆ |

**ತೋಟಗಾರಿಕೆ ಜಂಟಿ ನಿರ್ದೇಶಕರು**
**(ಯೋಜನೆ)**

## 2020-21ನೇ ಸಾಲಿನಲ್ಲಿ ತೋಟಗಾರಿಕೆ ಇಲಾಖೆಯಿಂದ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳಡಿಯಲ್ಲಿ ಎಸ್.ಸಿ.ಪಿ/ಟಿ.ಎಸ್.ಪಿ ರೈತರಿಗೆ ನೀಡುತ್ತಿರುವ ಶೇಕಡ ಸಹಾಯಧನದ ವಿವರ

| ಕ್ರ. ಸಂ. | ಯೋಜನೆಗಳು | ಎಸ್.ಸಿ.ಪಿ/ಟಿ.ಎಸ್.ಪಿ ರೈತರಿಗೆ ನೀಡುವ ಶೇಕಡಾವಾರು ಸಹಾಯಧನ (%) |
|---|---|---|
| I | **ಕೇಂದ್ರ ನೆರವಿನ ಯೋಜನೆಗಳು** | |
| 1 | ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ (ಹನಿ ನೀರಾವರಿ) | ಹನಿ ನೀರಾವರಿ ಅಳವಡಿಕೆಗೆ ಗರಿಷ್ಠ 5 ಹೆಕ್ಟೇರ್ ಪ್ರದೇಶಕ್ಕೆ ಸಹಾಯಧನ ನೀಡಲಾಗುತ್ತಿದೆ. ಮೊದಲ 2 ಹೆಕ್ಟೇರ್ ಪ್ರದೇಶಕ್ಕೆ **ಶೇ. 90 ರಷ್ಟು** ಸಹಾಯಧನ ಮತ್ತು ನಂತರದ 3 ಹೆಕ್ಟೇರ್ ಪ್ರದೇಶಕ್ಕೆ ಭಾರತ ಸರ್ಕಾರದ ಮಾರ್ಗಸೂಚಿಯನ್ವಯ ಶೇಕಡಾವಾರು ಮಿತಿಯೊಳಗೆ ಸಹಾಯಧನ ನೀಡಲಾಗುತ್ತಿದೆ. |
| 2 | ರಾಷ್ಟ್ರೀಯ ತೋಟಗಾರಿಕೆ ಮಿಷನ್ | ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ ವಿವಿಧ ಘಟಕಗಳಿಗೆ ಶೇ.30 ರಿಂದ 50 ರವರೆಗೆ ಸಹಾಯಧನ ನೀಡಲಾಗುತ್ತಿದ್ದು, ವಿವರ ಈ ಕೆಳಗಿನಂತಿದೆ; |

| ಘಟಕಗಳು | ಘಟಕದ ವೆಚ್ಚ (ರೂ. ಲಕ್ಷಗಳಲ್ಲಿ) | ಶೇಕಡವಾರು(%) |
|---|---|---|
| ತರಕಾರಿ ಹಾಗೂ ಸಾಂಬಾರು ಬೀಜೋತ್ಪಾದನೆ | Open pollinated ಬೆಳೆಗಳು - 0.35 ಪ್ರತಿ ಹೆಕ್ಟೇರ್ ಗೆ, ಹೈಬ್ರಿಡ್ - 1.50/ ಪ್ರತಿ ಹೆಕ್ಟೇರ್ ಗೆ | 35 |
| ಪುನಃಶ್ಚೇತನ - ಮಾವು, ಗೇರು, ಲಿಂಬೆ ಹಾಗೂ ಕಾಳು ಮೆಣಸು | 0.40/ ಪ್ರತಿ ಹೆಕ್ಟೇರ್ ಗೆ | 50 |
| ನೀರು ಸಂಗ್ರಹಣಾ ಘಟಕ | ಸಮುದಾಯ ಕೃಷಿ ಹೊಂಡ- 20.00 / ಪ್ರತಿ ಘಟಕಕ್ಕೆ , ವೈಯಕ್ತಿಕ ಕೃಷಿ ಹೊಂಡ - 1.50 /ಪ್ರತಿ ಘಟಕಕ್ಕೆ | 50 |
| ಸಂರಕ್ಷಿತ ಬೇಸಾಯ ಕಾರ್ಯಕ್ರಮ | ಪಾಲಿಮನೆ - 42.00/ ಪ್ರತಿ ಹೆಕ್ಟೇರ್ ಗೆ, ನೆರಳು ಪರದೆ ಮನೆ- 19.70/ ಪ್ರತಿ ಹೆಕ್ಟೇರ್ ಗೆ | 50 |
| ಸಮಗ್ರ ಪೋಷಕಾಂಶ ಮತ್ತು ರೋಗ/ಕೀಟ ನಿರ್ವಹಣೆ | 0.04/ ಪ್ರತಿ ಹೆಕ್ಟೇರ್ ಗೆ | 30 |
| ಜೇನು ಕೃಷಿ | 0.02 / ಪ್ರತಿ ಜೇನು ಕಾಲೋನಿಗೆ | 40 |
| ಯಾಂತ್ರೀಕರಣ | **ಟ್ರಾಕ್ಟರ್ - 3.00 /ಪ್ರತಿ ಘಟಕಕ್ಕೆ, ಪವರ್ ಟಿಲ್ಲರ್ (<8HP) - 1.00/ಪ್ರತಿ** | 35 |
| ಕೊಯ್ಲೋತ್ತರ ನಿರ್ವಹಣಾ ಘಟಕ - ಪ್ಯಾಕ್ ಹೌಸ್ | 4.00 / ಪ್ರತಿ ಘಟಕಕ್ಕೆ | 50 |
| ಕೊಯ್ಲೋತ್ತರ ನಿರ್ವಹಣಾ ಘಟಕ - ಪ್ರಾಥಮಿಕ ಸಂಸ್ಕರಣಾ ಘಟಕ | 25.00 / ಪ್ರತಿ ಘಟಕಕ್ಕೆ | 40 |
| ಕೊಯ್ಲೋತ್ತರ ನಿರ್ವಹಣಾ ಘಟಕ - ಈರುಳ್ಳಿ ಶೇಖರಣಾ ಘಟಕ | 1.75 / ಪ್ರತಿ ಘಟಕಕ್ಕೆ | 50 |
| ತಳ್ಳುವ ಗಾಡಿ | 0.30 / ಪ್ರತಿ ಘಟಕಕ್ಕೆ | 50 |

| | | |
|---|---|---|
| II | **ರಾಜ್ಯ ವಲಯ ಯೋಜನೆಗಳು** | |
| 1 | ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪ ಯೋಜನೆ ಕಾಯ್ದೆ 2013 ರಡಿ ಬಳಕೆಯಾಗದೆ ಇರುವ ಮೊತ್ತ | ಪ್ರಸಕ್ತ ಸಾಲಿನಲ್ಲಿ ಸದರಿ ಯೋಜನೆಯಡಿ ನಿಗದಿಯಾದ ಅನುದಾನವನ್ನು SMAM (Sub Mission on Agricultural Mechanization)ಯೋಜನೆಯಡಿ ಪ.ಜಾ/ ಪ.ಪಂ. ಫಲಾನುಭವಿಗಳಿಗೆ ಪವರ್ ಟಿಲ್ಲರ್ ವಿತರಣೆಗೆ ಶೇ.90ರಂತೆ ಗರಿಷ್ಟ 1 ಲಕ್ಷದವರೆಗೆ ಸಹಾಯಧನ ನೀಡಲು ವಿನಿಯೋಗಿಸಲಾಗುತ್ತಿದೆ. |
| 2 | ಸಮಗ್ರ ತೋಟಗಾರಿಕಾ ಅಭಿವೃದ್ಧಿ ಯೋಜನೆ | ರಾಜ್ಯದಲ್ಲಿ ಕೋವಿಡ್-19ರ ಲಾಕ್ ಡೌನ್ ಸಂಧರ್ಭದಲ್ಲಿ ಹಣ್ಣು, ಹೂವು ಮತ್ತು ತರಕಾರಿ ಬೆಳೆಗಾರರಿಗೆ ಉಂಟಾದ ನಷ್ಟಕ್ಕೆ ಪರಿಹಾರವಾಗಿ ಹೂವಿನ ಬೆಳೆಗಾರರಿಗೆ ರೂ.25000/- ಹೆಕ್ಟೇರ್ ಗೆ ಹಾಗೂ ಹಣ್ಣು ಮತ್ತು ತರಕಾರಿ ಬೆಳೆಗಾರರಿಗೆ ರೂ.15000/- ಹೆಕ್ಟೇರ್ ಗೆ ನೀಡಲಾಗುತ್ತಿದೆ. |

**2020-21ನೇ ಸಾಲಿನಲ್ಲಿ ತೋಟಗಾರಿಕೆ ಇಲಾಖೆಯಿಂದ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳಡಿಯಲ್ಲಿ ಎಸ್.ಸಿ.ಪಿ/ಟಿ.ಎಸ್.ಪಿ ರೈತರಿಗೆ ನೀಡುತ್ತಿರುವ ಶೇಕಡ ಸಹಾಯಧನದ ವಿವರ**

| ಕ್ರ. ಸಂ. | ಯೋಜನೆಗಳು | ಎಸ್.ಸಿ.ಪಿ/ಟಿ.ಎಸ್.ಪಿ ರೈತರಿಗೆ ನೀಡುವ ಶೇಕಡಾವಾರು ಸಹಾಯಧನ (%) |
|---|---|---|
| 3 | ತೋಟಗಾರಿಕೆ ಬೆಳೆಗಳ ಕೀಟ ಮತ್ತು ರೋಗಗಳ ಸಮಗ್ರ ನಿಯಂತ್ರಣ ಯೋಜನೆ | ಸಸ್ಯ ಸಂರಕ್ಷಣೆ ಔಷಧಿಗಳನ್ನು ಖರೀದಿಸಿದ ಪರಿಶಿಷ್ಟ ಜಾತಿ (SC) ಮತ್ತು ಪರಿಶಿಷ್ಟ ಪಂಗಡ (ST) ರೈತರಿಗೆ ಒಂದು ಘಟಕಕ್ಕೆ (1 ಹೆಕ್ಟೇರ್) ತಗಲುವ ಒಟ್ಟಾರೆ ವೆಚ್ಚ ರೂ.10,000/-ದ ಶೇ.90 ರಂತೆ ಪ್ರತಿ ಹೆಕ್ಟೇರ್ ಗೆ ಗರಿಷ್ಠ ರೂ.9000/-ಗಳ ಸಹಾಯಧನವನ್ನು ನೀಡಲಾಗುತ್ತಿದೆ. |
| **III** | **ಜಿಲ್ಲಾವಲಯ ಯೋಜನೆಗಳು** | |
| 1 | ತೋಟಗಾರಿಕೆ ಬೆಳೆಗಳಿಗೆ ವಿಶೇಷ ಹನಿ ನೀರಾವರಿ | ಹನಿ ನೀರಾವರಿ ಅಳವಡಿಕೆಗೆ ಗರಿಷ್ಠ 5 ಹೆಕ್ಟೇರ್ ಪ್ರದೇಶಕ್ಕೆ ಸಹಾಯಧನ ನೀಡಲಾಗುತ್ತಿದೆ. ಮೊದಲ 2 ಹೆಕ್ಟೇರ್ ಪ್ರದೇಶಕ್ಕೆ **ಶೇ. 90 ರಷ್ಟು** ಸಹಾಯಧನ ಮತ್ತು ನಂತರದ 3 ಹೆಕ್ಟೇರ್ ಪ್ರದೇಶಕ್ಕೆ ಭಾರತ ಸರ್ಕಾರದ ಮಾರ್ಗಸೂಚಿಯನ್ವಯ ಶೇಕಡಾವಾರು ಮಿತಿಯೊಳಗೆ ಸಹಾಯಧನ ನೀಡಲಾಗುತ್ತಿದೆ. |
| 2 | ಜೇನು ಸಾಕಾಣಿಕೆ | ಜೇನು ಪೆಟ್ಟಿಗೆ, ಜೇನು ಕುಟುಂಬ ಹಾಗೂ ಸ್ಟ್ಯಾಂಡ್ ಗೆ ತಗುಲುವ ವೆಚ್ಚ ರೂ.4500/-ರಲ್ಲಿ ಶೇ.90 ರಂತೆ ರೂ.4050/- ಗಳ ಸಹಾಯಧನ ನೀಡಲಾಗುತ್ತಿದೆ. |

**ತೋಟಗಾರಿಕೆ ಜಂಟಿ ನಿರ್ದೇಶಕರು**
**(ಯೋಜನೆ)**